# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

೧೦ನೇ ವರ್ಷ ೫ನೇ ಸಂಚಿಕೆ ಬೆಲೆ ೬೦ ಪೈಸೆ

ಭಾನುವಾರ ಕೊಪ್ಪ ೩-೨-೧೯೯೧ ದೂರವಾಣಿ ೧೧೪


## "ಡೀಸೆಲ್ ಕಾಳಸಂತೆ": ತಹಸೀಲ್ದಾರರಿಂದ ರೈತರ ಡೀಸೆಲ್ ಸಂಗ್ರಹ ವಶ—ಬಿಡುಗಡೆ

ಕೊಪ್ಪ : ಬಂಡಿಗಡಿಯ ರೈತರೊಬ್ಬರು ಡೀಸೆಲನ್ನು ಅಕ್ರಮ ದಾಸ್ತಾನು ಮಾಡಿ ಕಾಳಸಂತೆ ಮಾಡುತ್ತಿದ್ದಾರೆಂದು ಜಿಲ್ಲಾಧಿಕಾರಿಗಳಿಗೆ ಯಾರೋ ಮೂಗರ್ಜಿ ಬರೆದ ಮೇರೆಗೆ ತಹಸೀಲ್ದಾರರು ದಾಳಿ ನಡೆಸಿದಾಗ ಇಬ್ಬರು ರೈತರ ಮನೆಯಲ್ಲಿ ೧೨೦ ಲೀ. ಮತ್ತು ೧೫೦ ಲೀ. ಡೀಸೆಲ್ ದೊರೆತು ವಶಪಡಿಸಿಕೊಳ್ಳಲಾಯಿತಾದರೂ, ಆಯಾ ರೈತರು ತಮ್ಮ ಅವಶ್ಯಕತೆ ಕುರಿತ ದಾಖಲಾತಿಗಳನ್ನು ಹಾಜರುಪಡಿಸಿದ ಮೇರೆಗೆ, ಡೀಸೆಲ್‌ನ್ನು ಬಿಡುಗಡೆ ಮಾಡಿದರು.

ಡೀಸೆಲ್ ಕಾಳಸಂತೆಯಲ್ಲಿ ನಿರತರಾಗಿರುವವರ ಮೇಲೆ ಉಗ್ರ ಕ್ರಮ ಕೈಗೊಳ್ಳುವುದಾಗಿ ತಹಸೀಲ್ದಾರರು ಎಚ್ಚರಿಸಿದ್ದಾರೆ.

ಕೊಪ್ಪ ತಾ॥ನಲ್ಲಿ ಪ್ರತಿ ತಿಂಗಳಿಗೆ ಈ ಕೆಳಗಿನಂತೆ ಡೀಸೆಲ್ ಪೂರೈಕೆ ಮಿತಿಯನ್ನು ಶಾಂತಿ ಸಮಿತಿ ನಿಗದಿ ಪಡಿಸಿದೆ: ಟಿಲ್ಲರ್ ೬೦ ಲೀ., ಟ್ರ್ಯಾಕ್ಟರ್ ೨೦೦, ಕಾರು/ಜೀಪ್ ೨೫೦, ಮಧ್ಯಮ ವಾಹನ ೩೦೦, ಲಾರಿ/ಬಸ್ ೮೦೦; ಪಂಪ್ ಸೆಟ್‌ಗಳಿಗೆ: ೫ ಅಶ್ವಶಕ್ತಿಗೆ ೬೦ ಲೀ., ೧೦ಕ್ಕೆ ೧೦೦, ೧೬ಕ್ಕೆ ೧೨೫, ೪೦ಕ್ಕೆ ೨೦೦ ಮತ್ತು ೧೦೦ ಅಶ್ವಶಕ್ತಿಗೆ ೫೦೦ ಲೀಟರ್

ಈಡೇರದ ವೇತನ ಪರಿಷ್ಕರಣದ ಬೇಡಿಕೆ : ಮುಗಿಯದ ಶಂಕರ್ ಸಾರಿಗೆ ಮುಷ್ಕರ

# ಫೆ. ೬ರಂದು ಮಲೆನಾಡು ಬಂದ್‌ಗೆ ಕಾರ್ಮಿಕರ ಕರೆ

**ಕೊಪ್ಪ : ಕಾರ್ಮಿಕ ಸಂಘ ಮತ್ತು ಮಾಲಿಕರ ನಡುವೆ ಜ. ೩೧ ರಂದು ನಡೆದ ಮಾತುಕತೆ ಕೂಡ ವಿಫಲವಾಗಿದ್ದು, ಮಾಲಿಕರು ಕಾರ್ಮಿಕ ವಿರೋಧಿ ಹಠಮಾರಿತನವನ್ನು ಬಿಡುವಂತೆ ಮಾಡಲು ಫೆ ೬ ರ ಬುಧವಾರ ಇಡೀ ಮಲೆನಾಡು ಪ್ರಾಂತ್ಯ ಬಂದ್ ಮಾಡಲು ಕಾರ್ಮಿಕ ಸಂಘ ಕರೆಕೊಟ್ಟಿದೆ.**

ಎ.ಐ.ಟಿ.ಯು.ಸಿ, ಅ. ಭಾ. ವಿದ್ಯಾರ್ಥಿ ಫೆಡರೇಶನ್, ಬಾಳೆಹೊನ್ನೂರಿನ ರಸ್ತೆ ಬಳಕೆದಾರರ ವೇದಿಕೆ ಮುಂತಾದ ಸಂಘಟನೆಗಳ ಬೆಂಬಲದೊಂದಿಗೆ ಈ ಪ್ರತಿಭಟನೆ ಹಮ್ಮಿಕೊಳ್ಳಲಾಗಿದೆ ಎಂದು ಶಂಕರ್ ಕಾರ್ಮಿಕ ಸಂಘದ ಪ್ರಧಾನ ಕಾರ್ಯದರ್ಶಿ ಚಿಕ್ಕೇಗೌಡ ತಿಳಿಸಿದ್ದಾರೆ.

ಬೆಂಗಳೂರಿನಲ್ಲಿ ಕಾರ್ಮಿಕ ಸಂಘ ಮತ್ತು ಮಾಲಿಕರ ನಡುವೆ ಜ. ೩೧ರಂದು ನಡೆದ ಸಭೆಯಲ್ಲೂ ಸಹ ಮಾಲಿಕರು ಹಿಂದಿನಿಂದ ಹೇಳುತ್ತ ಬಂದಿರುವಂತೆ ೩ ಲಕ್ಷ ರೂ.ಗಿಂತ ಹೆಚ್ಚು ಕೊಡಲು ನಿರಾಕರಿಸಿದ್ದರಿಂದ ಮಾತುಕತೆ ವಿಫಲವಾಯಿತೆಂದರು. ಪುನಃ ಬೆಂಗಳೂರಿನಲ್ಲಿ ಕಾರ್ಮಿಕ ಕಮಿಶನರ್ ಎದುರು ಫೆ. ೮ಕ್ಕೆ ಸಭೆ ನಡೆಯಲಿದೆಯಾದರೂ, ಮಾಲಿಕರು ಹೊಸ ಆಶಾದಾಯಕ ಕೊಡುಗೆಯನ್ನೇನೂ ಮುಂದಿಡುವ ನಿರೀಕ್ಷೆಯಿಲ್ಲ ಎನ್ನಲಾಗಿದೆ.

ಈ ಬಾರಿ ಸಂಸ್ಥೆಯ ಕಛೇರಿ ಸಿಬ್ಬಂದಿಯೂ ಸೇರಿ ಇಡೀ ಕಾರ್ಮಿಕ ಸಮೂಹ ಒಗ್ಗಟ್ಟಾಗಿರುವುದರಿಂದ ಅಧೀರರಾಗಿರುವ ಮಾಲಿಕರು, ಕಾರ್ಮಿಕರ ನ್ಯಾಯಯುತ ಬೇಡಿಕೆಗಳನ್ನು ಈಡೇರಿಸಿ ವಿವಾದ ಬಗೆಹರಿಸುವ ಬದಲು, ಕೆಲವು ಬಸ್ ಸರ್ವಿಸ್‌ಗಳನ್ನು ರದ್ದು ಮಾಡಿ, ಹಲವು ಜನ ಹಿರಿಯ ಕಾರ್ಮಿಕರನ್ನು ಬರ್ಖಾಸ್ತು (ರಿಟ್ರೆಂಚ್) ಗೊಳಿಸಿ ಕಾರ್ಮಿಕ ಸಂಘದ ಬಲ ಮುರಿಯಲು ಹವಣಿಸುತ್ತಿದ್ದಾರೆಂದೂ ಚಿಕ್ಕೇಗೌಡ ಆಪಾದಿಸಿದರು.

ಕಾರ್ಮಿಕ ವಿವಾದಗಳಲ್ಲಿ ಹೆಚ್ಚಿಗೆ ಅನುಭವವಿಲ್ಲದ ಮಾಲಿಕರಿಗೆ ಸರಿಯಾದ ಮಾರ್ಗದರ್ಶನ ನೀಡಬೇಕಿದ್ದ ಸಂಸ್ಥೆಯ ಆಡಳಿತ ಮ್ಯಾನೇಜರ್ ನಂಜುಂಡಯ್ಯ ಮತ್ತು ಕಾನೂನು ಸಲಹೆಗಾರ ಚಿಕ್ಕಮಗಳೂರಿನ ರಾಮದಾಸ್ ಇವರುಗಳೇ ಮಾಲೀಕರನ್ನು ಹಾದಿ ತಪ್ಪಿಸುತ್ತಿದ್ದಾರೆಂದೂ ಅವರು ಆರೋಪಿಸಿದರು.

ಮಾಲಿಕರು ಶೀಘ್ರವೇ ವಿವಾದ ಇತ್ಯರ್ಥಪಡಿಸದಿದ್ದರೆ ಮಲೆನಾಡು ಪ್ರಾಂತ್ಯದಲ್ಲಿ ಜನರಿಂದ ತೀವ್ರ ರೀತಿಯ ಗಲಭೆಗಳಾಗಬಹುದೆಂದೂ ಅವರು ಆತಂಕ ವ್ಯಕ್ತಪಡಿಸಿದ್ದಾರೆ.

### ಸಾರ್ವಜನಿಕ ಹಿತರಕ್ಷಣಾ ಹೋರಾಟ ಸಮಿತಿ ಪ್ರತಿಭಟನೆ

ಕಾರ್ಮಿಕ ವಿವಾದವನ್ನು ಕೂಡಲೇ ಬಗೆಹರಿಸಿ ಶಂಕರ್ ಸಾರಿಗೆಯವರು ಕೂಡಲೇ ಬಸ್ ಸೌಕರ್ಯ ಪುನರಾರಂಭಿಸಬೇಕು. ಅಧಾಗದಿದ್ದರೆ ಸರ್ಕಾರ ಮಧ್ಯ ಪ್ರವೇಶಿಸಿ ಸಾರಿಗೆ ವ್ಯವಸ್ಥೆ ಮಾಡಬೇಕು ಎಂದು ಒತ್ತಾಯಿಸಿ, ಕೊಪ್ಪ ತಾ॥ ಸಾರ್ವಜನಿಕ ಹಿತರಕ್ಷಣಾ ಹೋರಾಟ ಸಮಿತಿ ನೇತೃತ್ವದಲ್ಲಿ ಫೆ ೧ರಂದು ಪ್ರತಿಭಟನೆ ನಡೆಯಿತು.

ಕೊಪ್ಪದ ಪ್ರ. ದ. ಕಾಲೇಜು ಮತ್ತು ಕಿರಿಯ ಕಾಲೇಜಿನ ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದ ಈ ಪ್ರತಿಭಟನಾ ಸಭೆ ಮತ್ತು ಮೆರವಣಿಗೆಯ ನಂತರ ತಹಸೀಲ್ದಾರರಿಗೆ ಮನವಿ ಸಲ್ಲಿಸಲಾಯಿತು.

ವಕೀಲರು ಮತ್ತು ಹೋರಾಟ ಸಮಿತಿ ಅಧ್ಯಕ್ಷರಾದ ಕಂಠಿ ಹಾಗೂ ಶ್ರೀನಿವಾಸ್, ನಾರಾಯಣ್, ಗೋಪಾಲ ಗೌಡ, ಪರಮೇಶ್ ಮತ್ತು ಕೋದಂಡರಾಂ ಸಭೆಯನ್ನುದ್ದೇಶಿಸಿ ಮಾತನಾಡಿದರು.

ಸಮಸ್ಯೆ ಪರಿಹಾರಕ್ಕೆ ಫೆ. ೬ರವರೆಗೆ ಗಡುವು ನೀಡಿರುವ ಹೋರಾಟ ಸಮಿತಿಯು, ಆ ದಿನದಿಂದ ಚಳುವಳಿಯನ್ನು ತಾಲ್ಲೂಕಿನಾದ್ಯಂತ ತೀವ್ರಗೊಳಿಸುವುದಾಗಿ ಎಚ್ಚರಿಸಿದೆ.

ಈ ಮಧ್ಯೆ ಕಾರ್ಮಿಕರು ಕರೆ ಕೊಟ್ಟಿರುವ ಫೆ. ೬ರ ಮಲೆನಾಡು ಬಂದ್ ಚಳುವಳಿಗೆ ಸಮಿತಿ ಪೂರ್ಣ ಬೆಂಬಲ ನೀಡುವುದೆಂದು ಹೋರಾಟ ಸಮಿತಿ ಕಾರ್ಯದರ್ಶಿ ಗೋಪಾಲಗೌಡ ತಿಳಿಸಿದ್ದಾರೆ.

ದೊಡ್ಡ ದೊಡ್ಡ ಸಂಬಳದ ಅಧಿಕಾರಿಗಳೇ ಕಾಲಕಾಲಕ್ಕೆ ವೇತನ ಪರಿಷ್ಕರಣ ಮತ್ತಿತರ ಸೌಲಭ್ಯಗಳಿಗಾಗಿ ಮುಷ್ಕರ ನಡೆಸುವಾಗ, ಅತ್ಯಂತ ಕಡಿಮೆ ಸಂಬಳ ಪಡೆಯುವ ಶಂಕರ್ ಕಾರ್ಮಿಕರು ಜೀವನ ವೆಚ್ಚ ತೀವ್ರವಾಗಿ ಏರಿರುವ ಈ ದಿನ

(ಕೊನೆಯ ಪುಟಕ್ಕೆ)

## ಶಿವಮೊಗ್ಗಕ್ಕೆ ಗದ್ದರ್

'ಕ್ರಾಂತಿಕಾರಿ ಜನಸಂಸ್ಕೃತಿಯ ಹರಿಕಾರ', 'ರೋಷತಪ್ತ ಲಾವಣಿಕಾರ' (the angry balladeer) ಎಂದೆಲ್ಲ ಪತ್ರಿಕೆಗಳಿಂದ ಕರೆಯಿಸಿಕೊಳ್ಳುತ್ತಿರುವ ಆಂಧ್ರದ ವಿಖ್ಯಾತ ನಕ್ಸಲ್‌ವಾದಿ ಗಾಯಕ ಗದ್ದರ್ ಇದೇ ಫೆಬ್ರವರಿ ೧೨ರ ಮಂಗಳವಾರ ಸಂಜೆ ೬ ಗಂಟೆಗೆ ಶಿವಮೊಗ್ಗಕ್ಕೆ ಬರಲಿದ್ದಾರೆ.

ಅಲ್ಲಿನ ಬಿ.ಎಚ್. ರಸ್ತೆಯ ವಿನಾಯಕ್ಷಿ ಭವನದೆದುರಿನ ಸೈನ್ಸ್ ಮೈದಾನದಲ್ಲಿ ಆತನ ಜನನಾಟ್ಯ ಮಂಡಳಿಯ ಸಾಂಸ್ಕೃತಿಕ ಕಾರ್ಯಕ್ರಮ ನಡೆಯುವುದೆಂದು ಪ್ರಗತಿಪರ ವಿದ್ಯಾರ್ಥಿ ಕೇಂದ್ರದ (ಪಿವಿಕೆ) ಪತ್ರಿಕಾ ಪ್ರಕಟಣೆ ತಿಳಿಸಿದೆ.

---

ವಿಚಾರ ಸಂಕಿರಣ

## ಅಯೋಧ್ಯೆ ಮತ್ತು ಮಂದಿರ-ಮಸೀದಿ ವಿವಾದ

**ದಿನಾಂಕ : 10-2-1991ನೇ ಭಾನುವಾರ ಬೆಳಿಗ್ಗೆ 10-30 ಕ್ಕೆ**

**ಸ್ಥಳ : ಪುರಭವನ, ಕೊಪ್ಪ.**

ಭಾಷಣಕಾರರು :

ಅಯೋಧ್ಯೆ : ಕೆಲವು ಐತಿಹಾಸಿಕ ಸಂಗತಿಗಳು

**-ಡಾ॥ ರಾಜಾರಾಂ ಹೆಗಡೆ, ಇತಿಹಾಸ ಉಪನ್ಯಾಸಕರು,**

ಕುವೆಂಪು ವಿಶ್ವವಿದ್ಯಾನಿಲಯ

ಮಂದಿರ-ಮಸೀದಿ ವಿವಾದ ಮತ್ತು ಕೋಮುಸೌಹಾರ್ದ

**-ಶ್ರೀ ವಡ್ಡರ್ಸೆ ರಘುರಾಮ ಶೆಟ್ಟರು,**

'ಮುಂಗಾರು' ದಿನ ಪತ್ರಿಕೆಯ ಸಂಸ್ಥಾಪಕ ಸಂಪಾದಕರು

ಆಸಕ್ತರೆಲ್ಲರಿಗೂ ಸುಸ್ವಾಗತ.

ಬನ್ನಿ, ಅರ್ಥಪೂರ್ಣ ಚರ್ಚೆಯಲ್ಲಿ ಪಾಲ್ಗೊಳ್ಳಿ

ವಿ. ಸೂ : ಕಾರ್ಯಕ್ರಮ ಕರಾರುವಾಕ್ಕಾಗಿ ಆರಂಭವಾಗಬೇಕಿದೆ. ಆಸಕ್ತರು ಸಮಯಕ್ಕೆ ಸರಿಯಾಗಿ ಬಂದು ಸಹಕರಿಸಿ.

'ಮುಂಜಾವು' ವಾರ ಪತ್ರಿಕೆ ಬಳಗ,
ಕೊಪ್ಪ.

ವಿ.ಸೂ.: ಜಾತಿ ಮತಗಳ ದ್ವೇಷ ಅಥವಾ ತಾರತಮ್ಯ, ಮೂಢ ನಂಬಿಕೆ ಮುಂತಾದುವನ್ನು ಒಪ್ಪದೆ, ನಿಷ್ಕಳಂಕ ಮನುಷ್ಯತ್ವದ ಬಗ್ಗೆ ಕಾಳಜಿಯುಳ್ಳ, ಪ್ರಗತಿಪರ ಆಲೋಚನೆಯ ಸಮಾನ ಮನಸ್ಕರ ಅನೌಪಚಾರಿಕ ವೇದಿಕೆಯೊಂದನ್ನು ಕೊಪ್ಪ, ಶೃಂಗೇರಿ, ನ. ರಾ. ಪುರ ತಾ॥ಗಳ ಮಟ್ಟದಲ್ಲಿ ಕಟ್ಟಿಕೊಳ್ಳುವ ಬಗ್ಗೆ ಆಸಕ್ತರೊಡನೆ ಇದೇ ಸಂದರ್ಭದಲ್ಲಿ ಸಮಾಲೋಚಿಸುವ ಉದ್ದೇಶವಿದೆ. ಆದ್ದರಿಂದ ಈ ಮೂರೂ ತಾ॥ಗಳ ಆಸಕ್ತರೆಲ್ಲರೂ ತಪ್ಪದೆ ಈ ಕಾರ್ಯಕ್ರಮಕ್ಕೆ ಹಾಜರಾಗಲು ಕೋರಿದೆ. —ಸಂಪಾದಕ.

# ಒಂಟೆತ್ತಿನ ಸರದಾರ ಶೃಂಗೇರಿಯ ಈ ಬೆಳೆಗಾರ

ಕೃಷಿಕರಿಗೆ ಉಳುಮೆಯ ಎತ್ತು ಅಥವಾ ಕೋಣಗಳು ಬೇಕಾಗುವುದು ವರ್ಷಕ್ಕೆ ಕೇವಲ ಒಂದುವರೆ ತಿಂಗಳು ಮಾತ್ರ. (ಎರಡು ಬೆಳೆಗಾದರೆ ಮೂರು ತಿಂಗಳು). ಆದರೆ ಅವನ್ನು ಇಡೀ ವರ್ಷವೂ ಸಾಕಬೇಕಾಗಿದ್ದು ಎಷ್ಟೋ ಮಂದಿ ರೈತರಿಗೆ ಎತ್ತುಗಳ ಖರ್ಚು-ವೆಚ್ಚವನ್ನು ಭರಿಸುವುದು ನುಂಗಲಾರದ ತುತ್ತಾಗಿದೆ. ಇತ್ತೀಚೆಗೆ ಟಿಲ್ಲರ್ ಬಳಕೆ ಹೆಚ್ಚುತ್ತಿದ್ದರೂ, ಎಲ್ಲರಿಗೂ, ಎಲ್ಲಾ ಗದ್ದೆಗಳಿಗೂ ಇದರ ಬಳಕೆ ಅಸಾಧ್ಯ. ಡೀಸೆಲ್‌ನ ತೀವ್ರ ಬೆಲೆ ಏರಿಕೆ ಮತ್ತು ಅಭಾವ, ಬಿಡಿ ಭಾಗಗಳು ಮತ್ತು ಪದೇ ಪದೇ ರಿಪೇರಿಯ ಸಮಸ್ಯೆ— ಇವುಗಳಿಂದ ಟಿಲ್ಲರ್ ಬಳಸಲಾಗದೆ ಕಂಗಾಲಾದ ರೈತರಿಗೆ ಈ ಒಂಟೆತ್ತಿನ ಉಳುಮೆಯ ವಿಧಾನ ಆಶಾಕಿರಣ.

ಜೋಡೆತ್ತಿನಿಂದ ಒಂದು ದಿನದಲ್ಲಿ ಎಷ್ಟು ಜಮೀನನ್ನು ಉಳುಮೆ ಮಾಡಲು ಸಾಧ್ಯವೋ ಅಷ್ಟೇ ಜಮೀನನ್ನು ಒಂಟೆತ್ತಿನಿಂದ [illegible]

● ವಸಂತ ಕುಮಾರ್ ಹರ್ಡೀಕರ್

ಇನ್ನೂ ಯಶಸ್ವಿಯಾಗಿ ಉಳುಮೆ ಮಾಡಬಹುದೆಂದು ಸಾಧಿಸಿ ತೋರಿಸಿದ್ದಾರೆ— ಶೃಂಗೇರಿ ತಾಲ್ಲೂಕಿನ ಹೆಗ್ರೆ ವಾಸಿ ಶ್ರೀನಿವಾಸಯ್ಯ. ಮಧ್ಯಮ ಮತ್ತು ಸಣ್ಣ ರೈತರಿಗೆ ಈ ಒಂಟೆತ್ತಿನ ಉಳುಮೆಯ ಉಪಕರಣದಿಂದ ಅನೇಕ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಸಾಧ್ಯ.

### ದಣಿಯದ ಎತ್ತು

ಜೋಡೆತ್ತಿನ ಉಳುಮೆಯಲ್ಲಿ ಒಂದು ಎತ್ತು ಇನ್ನೊಂದಕ್ಕಿಂತ ಮುಂದೆ ಹೋಗುವುದು, ಮತ್ತೊಮ್ಮೆ. ಹೀಗೆ ಹಿಂದೆ ಬಿದ್ದ ಎತ್ತು ಮುಂದೆ ಹೋಗಿ ಮುಂದಿದ್ದ ಎತ್ತು ಹಿಂದೆ ಬೀಳುವುದು ಸರಿಪಾಠ. ಆಗೆಲ್ಲ ಹಿಂದೆ ಬೀಳುವ ಎತ್ತಿಗೆ ಅತೀ ಒತ್ತಡ ಬೀಳುತ್ತದೆ. ಒಟ್ಟಾರೆ ಎರಡು ಎತ್ತುಗಳೂ ಬೇಗನೆ ಸುಸ್ತಾಗುತ್ತವೆ. ಆದರೆ ಒಂಟೆತ್ತಿನ ಹೂಟಿಯಲ್ಲಿ ಎತ್ತು ಇಡೀ ದಿನ ಸಮಪ್ರಮಾಣದಲ್ಲಿ ಕೆಲಸ ಮಾಡುವುದರಿಂದ [illegible]ವುದೇ ಇಲ್ಲ; ಲೀಲಾಜಾಲವಾಗಿ ಕೆಲಸ ಮಾಡುತ್ತದೆ. ಈ ಮಾದರಿ ನೊಗ, [illegible]ನ ಉಳುಮೆ ಒಕ್ಕಣೆ ಮತ್ತು ಗಾಡಿ [illegible]ಂದ ಎತ್ತಿಗೆ ಹೆಗಲು ನೋವು ಕೂಡ ಬರುವುದಿಲ್ಲ ಎನ್ನುತ್ತಾರೆ ಶ್ರೀನಿವಾಸಯ್ಯ.

ಜೋಡೆತ್ತಿನ ಉಳುಮೆಯಲ್ಲಿ ಮಣ್ಣು ಅಗಲವಾಗಿ ಹರಡಿ ಬೀಳುತ್ತದೆ ಆಳ ಹೋಗುವುದೇ ಇಲ್ಲ. ಒಂಟೆತ್ತಿನ ಉಳುಮೆಯಲ್ಲಿ ಅಗಲ ಕಡಿಮೆಯಾಗಿ ಆಳ ಜಾಸ್ತಿಯಾಗಿ ಹೊಸ ಮಣ್ಣು ಮೇಲಕ್ಕೆ ಬರುತ್ತದೆ. ಒಂಟೆತ್ತಿನ ವೇಗವೂ ಜಾಸ್ತಿಯಾಗಿದ್ದು ಹೂಟಿ ಸಾಗುವುದಲ್ಲದೇ ಕೆಲಸಗಾರ ಚುರುಕಾಗಿದ್ದಷ್ಟೂ ಉಳುಮೆ ಜಾಸ್ತಿಯಾಗುತ್ತದೆ. ಜೋಡೆತ್ತುಗಳು ಸಾಮಾನ್ಯ ಆರು, ಎಂಟು ವರ್ಷ ಬಾಳಿಕೆ ಬಂದರೆ ಒಂಟೆತ್ತು ಹನ್ನೆರಡರಿಂದ ೧೫ ವರ್ಷಕ್ಕೂ ಹೂಟಿಗೆ ಬರುತ್ತದೆ ಎನ್ನುತ್ತಾರೆ ಅನುಭವಿ ಶ್ರೀನಿವಾಸಯ್ಯ.

ಜೋಡೆತ್ತಿನ ಉಳುಮೆಯಲ್ಲಿ ಗದ್ದೆಯ ಕೆಳಬದಿ ಹೊಂಡವಾಗಿ ಮೇಲ್ಬದಿಯು ವರ್ಷವೂ ಎತ್ತರವಾಗುತ್ತಾ ಹೋಗುತ್ತದೆ. ಒಂಟೆತ್ತಿನ ಉಳುಮೆ ಮತ್ತು ಪಟ್ಲರ್ ಸಹಾಯದಿಂದ ಗದ್ದೆಯ ಎಲ್ಲಾ ಬದಿ ಮಟ್ಟವಾಗಿ ಎಲ್ಲಾ ಕಡೆಯೂ ಒಂದೇ ರೀತಿ ನೀರು ನಿಲ್ಲಲು ಸಹಕಾರಿ. ಮೂರರಿಂದ ಐದು ಎಕರೆ ಭೂಮಿಯಲ್ಲಿ ಒಂಟೆತ್ತಿನಿಂದ ಒಂದು ಬೆಳೆ ತೆಗೆಯಬಹುದೆಂದೂ ಅವರು ಹೇಳುತ್ತಾರೆ.

ಇವರ ಉಳುಮೆ ಕ್ರಮದಂತೆ ಭೂಮಿಯನ್ನು ಒಂದು ತಿಂಗಳ ಮುಂಚೆ ಉಳುಮೆ ಮಾಡಿ ನೀರು ಬಿಟ್ಟು ಕೊಳೆಸುವುದು ಅಗತ್ಯವಿಲ್ಲ. ನಾಟಿಗೆ ಕೇವಲ ನಾಲ್ಕಾರು ದಿನವಿರುವಾಗ ಹೊಳಕೆ ಮಾಡಿ ನಾಟಿಯ ಹಿಂದಿನ ದಿನ ಪಟ್ಲರ್ ಹೊಡೆದು ಮಾರನೆ ದಿನ ನಾಟಿ ಮಾಡಿದರೆ ಸಾಕೆನ್ನುತ್ತಾರೆ ಶ್ರೀನಿವಾಸಯ್ಯ. ಮಣ್ಣನ್ನು, ಕಳೆಯನ್ನು ಕೊಳೆಸುವುದಕ್ಕಿಂತ ಮಣ್ಣು ಬಿಸಿಪಾಕ ಇರುವಾಗಲೇ ನಾಟಿ ಮಾಡಿದಲ್ಲಿ ಉತ್ತಮ ಬೆಳೆಯನ್ನು ತೆಗೆಯಬಹುದು. ಈ [illegible]ತಿ ಹೂಟಿಯ ಕ್ರಮದಿಂದ [illegible] ಪೂರ್ತಿ ತಳಕ್ಕೆ ಸೇರಿ ಚೆನ್ನಾಗಿ ಕೊಳೆತು ನೆಟ್ಟ ಸಸಿಯ ಬೇರಿಗೆ ಒಳ್ಳೆಯ ಗೊಬ್ಬರ ಸಿಕ್ಕಿ ಸಸಿಯ ಚೆನ್ನಾದ ಬೆಳವಣಿಗೆ ಖಾತ್ರಿ ಎನ್ನುತ್ತಾರವರು.

ಎಲ್ಲರಂತೆ ಇವರೂ ಕೂಡ ಹಿಂದೆ ಜೋಡೆತ್ತಿನಿಂದಲೇ ಉಳುಮೆ ಮಾಡುತ್ತಿದ್ದರು. ಒಮ್ಮೆ ಒಂದು ಎತ್ತಿಗೆ ಹುಷಾರಿಲ್ಲದಿದ್ದಾಗ, ಯೋಚನೆ ಮಾಡಿ ತಾವೇ ಒಂಟೆತ್ತಿನ ನೊಗ ತಯಾರಿಸಿದರು. ನಂತರ ಕಬ್ಬಿಣದ ನೇಗಿಲನ್ನೂ ಕೂಡ ಮಾಡಿ ಹೂಟಿ ಪ್ರಾರಂಭಿಸಿದರು. ಹಲವಾರು ವರ್ಷದ ಪರಿಶ್ರಮದಿಂದ ಈಗ ಸುಧಾರಿತ ನೇಗಿಲು ಕೂಡ ಸಿದ್ಧಗೊಂಡಿದೆ. ಈಗಾಗಲೇ ತಾಲ್ಲೂಕಿನ ಅನೇಕ ಪ್ರತಿಷ್ಠರಿಗೆ, ಶಾಸಕರಿಗೆ ಮತ್ತು ಕೃಷಿ ಇಲಾಖೆಗೆ ತಮ್ಮ ನೂತನ ಮಾದರಿಯ ಒಂಟೆತ್ತಿನ ನೇಗಿಲು ನೊಗವನ್ನು ಪ್ರದರ್ಶಿಸಿ ಸಹಾಯ ಧನಕ್ಕಾಗಿ ವಿನಂತಿಸಿದ್ದರು. ಅವರೆಲ್ಲಾ ಇವರ ಸಾಧನೆಯನ್ನು ಬೆನ್ನು ತಟ್ಟಿ, ಬಾಯಿ ತುಂಬಾ ಹೊಗಳಿ, ಪ್ರೋತ್ಸಾಹದ ಮಾತನ್ನಾಡಿ ಸಹಕರಿಸುವುದಾಗಿ ತಿಳಿಸಿದ್ದರೂ ಇಲ್ಲಿಯವರೆಗೆ ಏನನ್ನೂ ಮಾಡಿಲ್ಲ.

ಒಂಟೆತ್ತಿನ ಪಟ್ಲರ್, ನೊಳ್ಳಿ, ಒಂಟೆತ್ತಿನ ಗಾಡಿ ಮತ್ತು ಒಂಟೆತ್ತಿನ [illegible] ಭತ್ತ ಒಕ್ಕಣೆ ಮಾಡುವ ಸಾಧನ (ರೋಣ್‌ಗಲ್) ಇವುಗಳನ್ನು ಮಾಡಿದ್ದು, ಇವರ ಶ್ರಮ ಸಾಹಸಗಳಿಗೆ ಸಲ್ಲಬೇಕಾದ ಪ್ರೋತ್ಸಾಹ ಸಿಕ್ಕಿಲ್ಲ. ಶೃಂಗೇರಿಯ ಜಾನುವಾರು ಜಾತ್ರೆಯಲ್ಲಿ ಈ ಎಲ್ಲಾ ಒಂಟೆತ್ತಿನ ಉಪಕರಣಗಳಿಗೆ ಮೂರು ಬಾರಿ ಪ್ರಶಸ್ತಿ ಪತ್ರವನ್ನು ಕೊಟ್ಟು ಸನ್ಮಾನಿಸಿದ್ದರೂ ಅದರಿಂದ ಇವರಿಗೆ ಯಾವುದೇ ಉಪಯೋಗ ಕಂಡಿಲ್ಲ. ಇಷ್ಟೆಲ್ಲಾ ಉಪಕರಣವನ್ನು ಸ್ವಂತ ಖರ್ಚಿನಿಂದ ತಾವೇ ಸಂಶೋಧಿಸಿ ನಿರ್ಮಾಣ ಮಾಡಿರುವ ಶ್ರೀನಿವಾಸಯ್ಯನವರು ಇದರ ಗುಟ್ಟನ್ನು ಯಾರಿಗೂ ಬಿಟ್ಟು ಕೊಟ್ಟಿಲ್ಲ. ಈಚೆಗೆ ಕೊಪ್ಪದಲ್ಲೂ ಇದರ ಪ್ರಾತ್ಯಕ್ಷಿಕೆ ಯಶಸ್ವಿಯಾಗಿ ನಡೆಯಿತು.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕೃಷಿ ಅಭಿವೃದ್ಧಿಗಾಗಿ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಿರುವ ಈ ಸಂದರ್ಭದಲ್ಲಿ ರೈತರೊಬ್ಬರು ಸ್ವಯಂ ಪ್ರೇರಣೆಯಿಂದ ಅತ್ಯಂತ ಸರಳ, ಉಪಯುಕ್ತವಾದ ಉಪಕರಣಗಳನ್ನು ತಯಾರಿಸಿದ್ದರೂ ಅವರಿಗೆ ಧನ ಸಹಾಯ ಮತ್ತು ಸೂಕ್ತ ಪ್ರೋತ್ಸಾಹ ದೊರೆಯದೇ ಇರುವುದನ್ನು ಗಮನಿಸಿದಾಗ ಕೃಷಿ

(ಮುಂದಿನ ಪುಟಕ್ಕೆ)

ಪದ್ಯದಂಗಣ

### ಅವನು ಕೊಂದ ಮನುಷ್ಯ

ನಾನು ಮತ್ತು ಅವನು
ಹಳ್ಳಿಯ ಹೋಟೆಲಲ್ಲಿ ಭೇಟಿಯಾಗಿದ್ದರೆ
ಅಕ್ಕ ಪಕ್ಕ ಕೂತು
ಚಹಾ ಕುಡಿಯುತ್ತಿದ್ದೆವು
ಆದರೆ ರಣರಂಗದಲ್ಲಿ ಮುಖಾಮುಖಿಯಾಗಿ
ಅವನು ನನ್ನತ್ತ ನಾನು ಅವನತ್ತ
ಗುಂಡು ಹಾರಿಸಿದೆವು
ನಿಂತಲ್ಲೇ ಅವನನ್ನು ಉರುಳಿಸಿದೆನು
ಹೌದು ನಾನು ಅವನನ್ನ–ಯಾಕೆ?
ಯಾಕೆಂದರೆ ಅತ ನನ್ನ ವೈರಿ
ಅಷ್ಟೇ : ನನ್ನ ವೈರಿ ಅವನು
ಅಷ್ಟೇ, ಮತ್ತಿನ್ನೇನ?
ಕೈಯಲ್ಲಿ ಕೆಲಸ ಇಲ್ಲ
ಕೈ ಬಿಟ್ಟಿತು ಜಮೀನೆಲ್ಲ
ದಂಡೇ ಗತಿ–ಎಂದು ನನ್ನಂತೆ ಅವನೂ
ದಿಕ್ಕೆಟ್ಟು ದಂಡಿಗೆ ದಾಖಲಾಗಿರಬೇಕು
ಯುದ್ಧವೆನ್ನುವುದು ಎಂಥ ಹುಚ್ಚು ವಿಚಿತ್ರ!
ಹೋಟೆಲಲ್ಲಿ ನಾವು ಉಪಚರಿಸಬಹುದಾದಂಥ,
ಕಷ್ಟಕ್ಕೆ ಎರಡು ಕಾಸು ನೆರವಾಗುವಂಥ
ಮನುಷ್ಯನನ್ನೇ ನಾವು ಕೊಲ್ಲುತ್ತೇವಲ್ಲ!

—ಥಾಮಸ್ ಹಾರ್ಡಿ.

(ಸೌಜನ್ಯ : 'ಆಂದೋಲನ')

# ಕೊಲ್ಲಿ ಬಿಕ್ಕಟ್ಟು : ಒಂದು ವಸ್ತುನಿಷ್ಠ ಬರಹ

ಪ್ರಿಯರೆ,

ಕೊಲ್ಲಿ ಬಿಕ್ಕಟ್ಟಿನ ಬಗ್ಗೆ ಬರೆದ ನಿಮ್ಮ ಲೇಖನ ಅದ್ಭುತವಾಗಿತ್ತು. ಸಾಮಾನ್ಯವಾಗಿ ವಿವಾದಾತ್ಮಕವಾಗಿರುವ ವಿಚಾರವನ್ನು ಅಡ್ಡ ಗೋಡೆಯ ಮೇಲೆ ದೀಪ ಇಟ್ಟಂತೆ ಬರೆಯುವವರ ಸಂಖ್ಯೆಯೇ ಈ ದಿನಗಳಲ್ಲಿ ಹೆಚ್ಚಿರುವಾಗ, ನೀವು ನಿಮ್ಮ ನಿಲುವನ್ನು ಯಾರ ಹಂಗಿಗೂ ಬದಲಿಸದೆ ಧೈರ್ಯವಾಗಿ ಪ್ರಚುರಪಡಿಸಿದ್ದಕ್ಕಾಗಿ ನಿಮಗೆ ನನ್ನ ಅಭಿನಂದನೆಗಳು.

ಇವತ್ತಿನ ದಿನಪತ್ರಿಕೆಯಲ್ಲಿ ಬ್ರಿಟನ್ನಿನ ಲೇಬರ್ ಪಾರ್ಟಿಯ ಮುಖಂಡ ಟೋನಿ ಬೆನ್ ತನ್ನ ರಾಷ್ಟ್ರ ಬ್ರಿಟನ್ ಮತ್ತು ಅಮೆರಿಕಾದ ಮುಖಕ್ಕೆ ಹೊಡೆದ ಹಾಗೆ ಹೇಳಿದ ಮಾತನ್ನು ಸಂದರ್ಭೋಚಿತವಾಗಿ ಉಲ್ಲೇಖಿಸುತ್ತೇನೆ: "ಟರ್ಕಿ ಸೈಪ್ರಸ್ ದೇಶವನ್ನು ಕಬಳಿಸಿದಾಗ ಅಮೆರಿಕಾ ಏನು ಮಾಡಿತು? ಸ್ವತಃ ಅಮೆರಿಕಾ ಪನಾಮಾ, ಗ್ರೆನೆಡಾಗಳನ್ನು ಆಕ್ರಮಿಸಿಕೊಂಡಿರಲಿಲ್ಲವೆ? ಇವರೇ ಚಿಲಿಯಲ್ಲಿ ಪಿನೋಚೆಟ್‌ನನ್ನು ಬೆಂಬಲಿಸಿ ಅಲ್ಲೆಂಡೆಯನ್ನು ಪದಚ್ಯುತಿಗೊಳಿಸಿ ಕೊಲ್ಲಲಿಲ್ಲವೆ? ಫಿಲಿಪೈನ್ಸ್‌ನಲ್ಲಿ ಮಾರ್ಕೋಸ್‌ನನ್ನು ಬೆಂಬಲಿಸಿ ಇವರು ಮಾಡಿದ್ದಾದರೂ ಏನು? ಈಗ ನಡೆಯುವ ಯುದ್ಧದಲ್ಲಿ ಸದ್ದಾಂ ಹುಸೇನ್‌ನನ್ನು ಸೋಲಿಸಬಹುದು. ಆದರೆ ಅಮೇರಿಕಾದ ವಿಜಯ ಒಂದು ದುರಂತವಾಗಿ ಪರಿಣಮಿಸುತ್ತದೆ. ಆದ್ದರಿಂದ ಅಮೇರಿಕಾವನ್ನು ಒಂದು ಪ್ರಜಾಪ್ರಭುತ್ವವಾದಿ ರಾಷ್ಟ್ರವೆಂದು ಎಷ್ಟು ಮಾತ್ರಕ್ಕೂ ಉದಾಹರಿಸತಕ್ಕದ್ದಲ್ಲ...." ಇತ್ಯಾದಿ.

ವಿಚಾರವಂತರು ಒಪ್ಪಲೇಬೇಕಾದ್ದು— ಜಗತ್ತಿನಲ್ಲಿ ಕಾಣಿಸುವ ಇಂದಿನ ಹೆಚ್ಚಿನ ಸಮಸ್ಯೆಗಳಿಗೆ ಅಮೇರಿಕಾವೇ ಕಾರಣ, ಸಂಶಯವಿಲ್ಲ. ಇವತ್ತು ಸದ್ದಾಂ ಸೆಡ್ಡು ಹೊಡೆದು ನಿಂತಿದ್ದಾನೆ—ಅಮೇರಿಕಾವೆಂಬ ಈ ದೈತ್ಯನೆದುರು. ಇದರ ಸಾಧಕ ಬಾಧಕಗಳು ಜಗತ್ತಿಗೆ ಈಗಾಗಲೇ ಗೊತ್ತೂ ಆಗಿದೆ.

‡ ‡ ‡

ಆದರೆ ಇಲ್ಲಿ ನನ್ನನ್ನು ಕಾಡುವ ಸಂಶಯವೊಂದಿದೆ. ಅದು, ಪದೇ ಪದೇ 'ಮುಸ್ಲಿಂ ರಾಷ್ಟ್ರ', 'ಮುಸ್ಲಿಂ ಜನ' ಎನ್ನುವ ಸದ್ದಾಂ ಮತಾಭಿಮಾನದ ಕೊರತೆಯಿಂದ ಮತಾಂಧನಾಗುವ ಸಾಧ್ಯಾಸಾಧ್ಯತೆಯ ಬಗ್ಗೆ. ಈ ಮತಾಂಧತೆಯು ಅಮೇರಿಕಾವನ್ನು ಒದ್ದೋಡಿಸುವವರೆಗೆ ತಾತ್ಕಾಲಿಕವಾಗಿ, ಸಾಂದರ್ಭಿಕವಾಗಿ ಮಾತ್ರ ಇರುವುದೆಂಬ ಗ್ಯಾರಂಟಿಯೇನೂ ಇಲ್ಲ ತಾನೆ?

ನಾನು ಈ ವಿಷಯ ಬರೆಯುವಾಗ ನಮ್ಮ ದೇಶದ ಸಿಖ್ ಮತಾಂಧತೆಯ ಭೂತ ಕಣ್ಣೆದುರು ಕಾಣಿಸುತ್ತಾ ಇದೆ. ರಾಜ್ಯಕ್ಕೆ ಸ್ವಯಮಾಧಿಕಾರ, ಆದಾಯದಲ್ಲಿ ಹೆಚ್ಚಿನ ಪಾಲು ಮುಂತಾದ ಉತ್ತಮ ಧ್ಯೇಯಗಳ ನ್ನಿಟ್ಟುಕೊಂಡ ಸಿಖ್ ಜನಾಂಗದ ಚಳುವಳಿಯ ನೇತೃತ್ವ ಒಬ್ಬ ಮತಾಂಧನ ಕೈಗೆ ಹೋದಾಗ, ಮತಾಂಧತೆ ಹೆಚ್ಚಿತು. ಈ ದಿನ ಉಗ್ರಗಾಮಿಗಳು ಒಂದು ಸಮನಾಂತರ ಸರ್ಕಾರವನ್ನು ನಡೆಸುವ ಮಟ್ಟಿಗೆ ಬಂದಿದ್ದಾರೆ. ಶಾಲಾ ಮಕ್ಕಳ ಸಮವಸ್ತ್ರದಲ್ಲೂ, ಹೆಂಗಸರ ಉಡುಗೆತೊಡುಗೆಗಳಲ್ಲೂ ಕಟ್ಟುಪಾಡು ಹೇರುವವರೆಗೆ ಹೋಗಿರುವ ಸಿಖ್ ಮತಾಂಧರನ್ನು ನೋಡಿಯೂ ನಾವು ಸದ್ದಾಂ ಹುಸೇನನ ಮತಾಂಧತೆಯನ್ನು ಅನುಮೋದಿಸುವಂತಾಗಬಾರದಲ್ಲ. ಈ ರೀತಿ ಜನರಲ್ಲಿ ಮತಾಂಧತೆಯ ಬೀಜ ಬಿತ್ತಿ ಅಧಿಕಾರ, ಅಧಿಕಾರದಿಂದ ಮತ್ತೆ ಮತಾಂಧತೆ—ಈ ವಿಷವರ್ತುಲ ನಿರಂತರ, ಹುಲಿ ಮೇಲೆ ಸವಾರಿ ಮಾಡಿದ ಹಾಗೆ!

ಹೆಚ್ಚೇಕೆ, ಕೆಲವು ತಿಂಗಳ ಹಿಂದೆ ಹಿಂದೂ ಧರ್ಮದ ಗುತ್ತಿಗೆ ಹಿಡಿದ ಕೆಲವೇ ಸಮರ್ಥನೀಯ ಹಿಂದೂಗಳಿಂದ ನಡೆದ ದುರಂತವನ್ನು ನೋಡಿಯೂ ನಾವು ಸದ್ದಾಂ ಹುಸೇನ್‌ಗೆ 'ಭೇಷ್' ಎನ್ನಬೇಕಾದರೆ ಆಲೋಚಿಸಬೇಕಾಗಿದೆ. ಒಟ್ಟಾರೆ ನನಗೆ ಸದ್ದಾಂ ಹುಸೇನ್ ಅಪಾಯಕಾರಿಯಾಗಿ ಪರಿಗಣಿಸುತ್ತಿದ್ದಾನೆ ಎಂಬ ಅನ್ನಿಸ್ತಾ ಇದೆ.

—ಅ. ನಾ. ಸೇರಿಗಾರ್,
ಹರಿಹರಪುರ.

# ಕುದುರೆಮುಖ : ಕನ್ನಡಿಗರಿಗಿಲ್ಲ ಇಲ್ಲಿ ಉದ್ಯೋಗ?

ಕರ್ನಾಟಕದ ಒಂದು ಪ್ರತಿಷ್ಠಿತ ಕೈಗಾರಿಕೆಯಾಗಿ ಕುದುರೆಮುಖ ಕಬ್ಬಿಣದ ಅದಿರು ಯೋಜನೆ ಆರಂಭವಾದಾಗ ಅದರಲ್ಲಿ ಪ್ರಾಂತೀಯರಿಗೆ, ಮುಖ್ಯವಾಗಿ ಸ್ಥಳೀಯರಿಗೆ ಉದ್ಯೋಗಾವಕಾಶ ದೊರೆಯಬಹುದೆಂಬ ನಂಬಿಕೆ ಅನೇಕ ನಿರುದ್ಯೋಗಿಗಳಲ್ಲಿತ್ತು. ಅದಕ್ಕೆ ಪೂರಕವಾಗಿ ಕಳಸದಲ್ಲಿಯೇ ಒಂದು ಉದ್ಯೋಗ ವಿನಿಮಯ ಕೇಂದ್ರವನ್ನು ತೆರೆದಿದ್ದು, ಅನೇಕ ಯುವಜನರು ಮಹದಾಸೆಯಿಂದ ತಮ್ಮ ಹೆಸರು ನೋಂದಾಯಿಸಿದ್ದರು. ಕೇವಲ ಕೆಲವರಿಗೆ ಮಾತ್ರ ಉದ್ಯೋಗಾವಕಾಶ ಸಿಕ್ಕಿತು. ನಂತರ ಆಗೀಗ ನೇಮಕಾತಿಯಾದಾಗ ಕೆಲ ಕನ್ನಡಿಗರಿಗೆ ಅಲ್ಲಿ ಕೆಲಸ ಸಿಕ್ಕಿತು.

## ಓದುಗರ ಪತ್ರಗಳು

ಆದರೆ ಈ ಸಂಸ್ಥೆಯಲ್ಲಿ ಈಗಿರುವ ನೇಮಕಾತಿ ಅಧಿಕಾರಿಗಳು ನೆರೆಯ ಕೇರಳ ರಾಜ್ಯದವರಾಗಿದ್ದು ಈ ಕೈಗಾರಿಕೆಯಲ್ಲಿ ನಿವೃತ್ತ ಸೈನಿಕರಿಂದ ಹಿಡಿದು ವಿವಿಧ ಅರ್ಹತೆಯ ಅಭ್ಯರ್ಥಿಗಳು ನಿರ್ವಹಿಸಬೇಕಾದ ಎಲ್ಲಾ ಹುದ್ದೆಗಳಿಗೂ ತಮ್ಮ ಕೇರಳ ರಾಜ್ಯದವರನ್ನೇ ನೇಮಕ ಮಾಡಿಕೊಳ್ಳುತ್ತಿದ್ದಾರೆಂದು ತಿಳಿದುಬಂದಿದೆ.

ಕನ್ನಡಿಗರನ್ನು ನೇಮಕ ಮಾಡಿಕೊಳ್ಳುವ ಸಮಯದಲ್ಲಿ ಸಂಬಂಧಪಟ್ಟ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಅಭ್ಯರ್ಥಿಯ ಹೆಸರು ನೋಂದಾಯಿತವಾಗಿರಬೇಕೆಂದು ಕಡ್ಡಾಯಪಡಿಸುವ ಈ ಅಧಿಕಾರಿ, ಕೇರಳೀಯರನ್ನು ನೇಮಕ ಮಾಡಿಕೊಳ್ಳುವಾಗ ಅಂಥ ನಿಯಮವನ್ನು ಏಕೆ ಪಾಲಿಸುವುದಿಲ್ಲ ? ಕರ್ನಾಟಕದ ಉದ್ಯೋಗ ವಿನಿಮಯ ಕೇಂದ್ರದ ಅಧಿಕಾರಿಗಳು ಸುಮ್ಮನಿರುವುದೇಕೆ ? ಅಥವಾ ಅವರಿಗೆ ತಿಳಿದೂ ಸುಮ್ಮನಿರುವರೇ?

ಡಾ|| ಸರೋಜಿನಿ ಮಹಿಷಿ ಸಮಿತಿ ವರದಿಯನ್ನು ಅನುಷ್ಠಾನಕ್ಕೆ ತರಲು ಮುಂದಾಗಿರುವ ನಮ್ಮ ಸರ್ಕಾರವೂ ಈ ಕಡೆ ಗಮನ ಹರಿಸಿಲ್ಲವೇಕೆ ? ಕನ್ನಡ ಚಳುವಳಿಗಾರರಿಗೂ ಈ ವಿಚಾರ ತಿಳಿಯದೆ ? ಇನ್ನು ಮುಂದಾದರೂ ಸರ್ಕಾರದವರು, ಕನ್ನಡ ಪರ ಹೋರಾಟಗಾರರು ಈ ಕಡೆ ಗಮನ ಹರಿಸಿ ಈ ಕೈಗಾರಿಕೆಯಲ್ಲಿ ಕನ್ನಡಿಗರಿಗೆ ಉದ್ಯೋಗಾವಕಾಶ ಕಲ್ಪಿಸಬೇಕಾಗಿದೆ

—ಬಿ. ಎಲ್. ಅಶೋಕರಾವ್, ಕೊಪ್ಪ

## ಒಂಟಿತ್ತಿನ ಸರದಾರ

(ಹಿಂದಿನ ಪುಟದಿಂದ)

ಅಭಿವೃದ್ಧಿಯ ಬಗ್ಗೆ ಜನ ನಾಯಕರ ಮತ್ತು ಸರ್ಕಾರದ ಧೋರಣೆ ತಿಳಿಯುತ್ತದೆ.

ಆದರೆ ಈ ಕುರಿತು ಕೆಲವು ಜಿಲ್ಲಾ ಮತ್ತು ಸ್ಥಳೀಯ ಪತ್ರಿಕೆಗಳಲ್ಲಿ ಈಚೆಗೆ ಲೇಖನಗಳು ಪ್ರಕಟವಾದ ಮೇಲೆ, ಜನವರಿ ೧೭ರಂದು ಶ್ರೀನಿವಾಸಯ್ಯನವರಲ್ಲಿಗೆ ಖುದ್ದು ಭೇಟಿ ನೀಡಿದ ಜಿಲ್ಲಾಧಿಕಾರಿ ಡಾ|| ಸುಬ್ರಮಣ್ಯ ಅವರು, ಈ ಉಪಕರಣದ ಕೆಲಸವನ್ನು ಪ್ರತ್ಯಕ್ಷ ಪರಿಶೀಲಿಸಿ, ಸರ್ಕಾರದಿಂದ ಇಂಥ ೫ ಸೆಟ್ ಉಪಕರಣಗಳನ್ನು ತಯಾರಿಸಿ, ಪ್ರಚುರಪಡಿಸುವ ನಿರ್ಧಾರ ತೆಗೆದುಕೊಂಡಿದ್ದಾರೆ

ಇದು ಶ್ರೀನಿವಾಸಯ್ಯನವರಿಗೆ ಸ್ವಲ್ಪ ನೆಮ್ಮದಿ ತಂದಿರುವುದಲ್ಲದೆ, ಡೀಸೆಲ್, ವಿದ್ಯುತ್ ಅಭಾವದ ಈ ದಿನಗಳಲ್ಲಿ ರೈತರ— ಮುಖ್ಯವಾಗಿ ಸಣ್ಣ–ಮಧ್ಯಮ ರೈತರ ಪಾಲಿಗೆ ಒಂದು ಆಶಾದಾಯಕ ಸಂಗತಿಯಾಗಿದೆ

## ಕೊಪ್ಪ ಮಾರ್ಕೆಟ್ ರಸ್ತೆ ಹಂದಿ ಮಾಂಸದ ಅಂಗಡಿ
# ಪರವಾನಗಿ ಹಗರಣ : ಇಬ್ಬಗೆ ನೀತಿ

ಕೊಪ್ಪ ಮಾರ್ಕೆಟ್ ರಸ್ತೆಯಲ್ಲಿ ನನಗೆ ಶೀತಲೀಕೃತ ಹಂದಿ ಮಾಂಸ ಮಾರಾಟಕ್ಕೆ ನೀಡಲಾಗಿದ್ದ ಪರವಾನಗಿಯನ್ನು ಜಿಲ್ಲಾ ಪರಿಷತ್ತು ರದ್ದು ಮಾಡಿದೆ ಈ ವಿಚಾರದಲ್ಲಿ ಪತ್ರಿಕೆಗಳಲ್ಲೂ ಹಲವು ಅಭಿಪ್ರಾಯಗಳು, ವರದಿಗಳು ಬಂದಿವೆ. ಆ ವಿಚಾರದ ಹಿನ್ನೆಲೆಯ ನಿಜ ಸಂಗತಿಯನ್ನು ಸಾರ್ವಜನಿಕರ ಅವಗಾಹನೆಗೆ ತರಲು ಬಯಸುತ್ತೇನೆ.

ಕೊಪ್ಪದಲ್ಲಿ ಮೊಟ್ಟಮೊದಲ ಬಾರಿಗೆ ಹಂದಿ ಮಾಂಸವನ್ನು ಶೀತಲೀಕರಣ ಯಂತ್ರದಲ್ಲಿಟ್ಟು ಮಾರುವ ಪರವಾನಗಿಯನ್ನು (ಬಾಳಗಡಿ ರಸ್ತೆಯಲ್ಲಿ) ನಾನು ಪಡೆದಿದ್ದೆ. ಅದಾಗಿ ೨ ವರ್ಷದಲ್ಲಿ ಮಾರ್ಕೆಟ್ ರಸ್ತೆಯಲ್ಲಿ ಜಾಫರ್ ಸಾಹೇಬ್ ಮತ್ತು ವೈದ್ಯಲಿಂಗಂ ಎಂಬವರಿಗೆ ಇದೇ ರೀತಿಯ ಪರವಾನಗಿ ನೀಡಲಾಯಿತು. (ವೈದ್ಯಲಿಂಗಂ ಬದಲಿಗೆ ಈಗ ನಾಗರಾಜ ಎಂಬವರು ಅಂಗಡಿ ನಡೆಸುತ್ತಿದ್ದಾರೆ.)

ಇದರಿಂದ ನನ್ನ ವ್ಯಾಪಾರಕ್ಕೆ ಧಕ್ಕೆಯಾದ್ದರಿಂದ ನಾನೂ ಸಹ ಮಾರ್ಕೆಟ್ ರಸ್ತೆಯಲ್ಲೇ (ಸದರಿ ನಾಗರಾಜರ ಅಂಗಡಿಯ ಎದುರು) ಒಂದು ಮಳಿಗೆ ಪಡೆದುಕೊಂಡು, ನನ್ನ ಲೈಸೆನ್ಸ್‌ನ್ನು ಅಲ್ಲಿಗೆ ವರ್ಗಾಯಿಸಲು ಅರ್ಜಿ ಹಾಕಿಕೊಂಡೆ. ಆದರೆ ಅಲ್ಲಿ ಆಗಲೇ ೨ ಅಂಗಡಿಗಳಿಗೆ ಲೈಸೆನ್ಸ್ ಕೊಟ್ಟಿದ್ದಾಗ್ಯೂ ಸಹ ನನಗೆ ಮಾತ್ರ. "ಅಲ್ಲಿ ಶಾಲೆ ಮತ್ತು ಮಸೀದಿ ಹತ್ತಿರದಲ್ಲೇ ಇವೆ" ಎಂಬ ಕಾರಣ ನೀಡಿ ಪದೇ ಪದೇ ನನ್ನ ಅರ್ಜಿಯನ್ನು ತಳ್ಳಿ ಹಾಕಿದರು.

ವಾಸ್ತವವೆಂದರೆ ಮಾಂಸವನ್ನು ಫ್ರಿಜ್‌ನಲ್ಲಿ ಪೊಟ್ಟಣಗಳಲ್ಲಿಟ್ಟು ಮಾರುವುದರಿಂದ, ಅದು ಹೊರಗಡೆಗೆ ಕಾಣುವುದೂ ಇಲ್ಲ, ವಾಸನೆ ಅಥವಾ ಗಲೀಜಾಗುವುದೂ ಇಲ್ಲ. ಆದರೂ ನನ್ನ ಮನವಿಯನ್ನು ಪುರಸಭೆಯವರು ಕೇಳಿಸಿಕೊಳ್ಳಲೇ ಇಲ್ಲ.

ಅನಂತರ ಹೊಸ ಮಂಡಲ ಆಡಳಿತ ಸಮಿತಿ ಬಂದ ಮೇಲೆ ನಾನು ಪುನಃ ಅರ್ಜಿ ಹಾಕಿದ್ದನ್ನು ಪ್ರಧಾನರಾದ ಪಿ. ಬಿ. ವಿವೇಕ್‌ರವರು ಪರಿಶೀಲಿಸಿ, ನನಗೆ ಉದ್ದೇಶಪೂರ್ವಕ ಅನ್ಯಾಯ ಮಾಡಲಾಗಿದೆಯೆಂಬುದನ್ನು ಮನಗಂಡು ನನ್ನ ಅರ್ಜಿಯ ವಿಚಾರವನ್ನು ತಾ|| ೩-೯-೯೦ರ ಕೌನ್ಸಿಲ್ ಮೀಟಿಂಗ್‌ಗೆ ಇಟ್ಟರು.

ಅಲ್ಲಿ ನಿರ್ಣಯ ಸಂಖ್ಯೆ ೨೮ (೧)ರ ಪ್ರಕಾರ, ನನಗೆ ಬಾಳಗಡಿ ರಸ್ತೆಯಲ್ಲಿ ವ್ಯಾಪಾರ ಇಲ್ಲವಾಗಿರುವುದನ್ನು ಮನಗಂಡು ಹಾಗೂ ಮಾರ್ಕೆಟ್ ರಸ್ತೆಯಲ್ಲಿ ಇನ್ನೊಂದು ಹಂದಿ ಮಾಂಸದ ಅಂಗಡಿಗೆ ಪರವಾನಗಿ ಕೊಟ್ಟರೆ ಜನರಿಗೆ ಹೆಚ್ಚಿನ ಉಪಯೋಗವಿದೆಯೆಂದು ಸಾರ್ವಜನಿಕರಿಂದ ಬಂದಿದ್ದ ಅರ್ಜಿಯನ್ನೂ ಗಮನದಲ್ಲಿಟ್ಟುಕೊಂಡು, ನನ್ನ ಲೈಸೆನ್ಸನ್ನು ಮಾರ್ಕೆಟ್ ರಸ್ತೆಗೆ ವರ್ಗಾಯಿಸಿಕೊಡಲು **ಸರ್ವಾನುಮತದಿಂದ ಒಪ್ಪಲಾಯಿತು**. ಇದರನ್ವಯ ವಿವೇಕ್‌ರವರು ನನಗೆ ಪರವಾನಗಿ ಕೊಟ್ಟರು. (068 ನಂ. 54/90–91).

ಆದರೆ ಕೇವಲ ೨೦ ದಿನಗಳಾಗುವಷ್ಟರಲ್ಲಿ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಶಾಸಕರಿಗೆ, ಜಿಲ್ಲಾ ಪರಿಷತ್ತಿಗೆ, ಬಿ.ಡಿ.ಒ., ಡಿಸಿ, ಎಸ್ಪಿ, ತಹಸೀಲ್ದಾರ್ ಮುಂತಾದ ಹಲವು ಅಧಿಕಾರಿಗಳಿಗೆ ದೂರೊಂದನ್ನು ಬರೆದು, ಇಲ್ಲಿ ನನಗೆ ಪರವಾನಗಿ ಕೊಟ್ಟಿರುವುದರಿಂದ ಈ ಪ್ರದೇಶದಲ್ಲಿ ಶಾಂತಿ ಕದಡಿ ಕೋಮು ಗಲಭೆ ಉಂಟಾಗಬಹುದೆಂದು

(ಮುಂದಿನ ಪುಟಕ್ಕೆ)

## ಹಳ್ಳಿಗಾಡಿನ ಈ ಗರಡಿ ಮನೆಗೆ
# ಸರ್ಕಾರದ ಮನ್ನಣೆ ಸಿಕ್ಕೀತೆ ?

ಕ್ರೀಡೆ ಮತ್ತು ಅಥ್ಲೆಟಿಕ್ಸ್‌ಗಳಿಗಾಗಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಿವೆಯಷ್ಟೆ ? ಆದರೆ ಯಾವುದೇ ಪ್ರಚಾರ, ನೆರವು ದೊರೆಯದಿದ್ದರೂ ಕೊಪ್ಪ ತಾಲ್ಲೂಕಿನ ಮೂಲೆಯ ಹುಹುಪುರದಲ್ಲಿ ಒಂದು ವಿಶಿಷ್ಟ ಪ್ರಯೋಗ ನಡೆಯುತ್ತಿದೆ.

**ಅದಮ್ಯ ಉತ್ಸಾಹ :** ಸ್ಥಳೀಯ ಅ.ರಾ.ಸ. ಪ ಪೂರ್ವ ಕಾಲೇಜಿನ ದೈಹಿಕ ಶಿಕ್ಷಕ, ಎನ್.ಐ.ಎಸ್. ತರಬೇತಿ ಪಡೆದಿರುವ ಕುಸ್ತಿ ಪಟು, ಮಲ್ಲ ಕಂಭ ಪ್ರವೀಣ ವಿ. ಎಂ. ಶಿವಮೂರ್ತಿ ಊರಿನ ಜನತೆಯ ಹಾಗೂ ಮಂಡಲ ಪಂಚಾಯತಿಯ ಸಹಕಾರದಿಂದ ಗರಡಿ ಮನೆಯೊಂದನ್ನು ನಡೆಸಿಕೊಂಡು ಬಂದಿದ್ದು, ಈಗಾಗಲೇ ರಾಜ್ಯ ಮಟ್ಟದ ಸ್ಪರ್ಧಿಗಳನ್ನು 'ತಯಾರಿಸಿ'ದ್ದಾರೆ.

**ನಾಸಿರ್‌ಖಾನ್ ಎಂಬ ಛೋಟು**

ಹಾಲಿ ಹದಿಮೂರು ಜನ ಕುಸ್ತಿ ಪಟುಗಳು ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದು ಕ್ರೀಡಾ ಹಾಸ್ಟೆಲ್‌ನ ಮಲ್ಲರಿಗೂ ಸೆಡ್ಡು ಹೊಡೆಯುತ್ತಿದ್ದಾರೆ. ಹಿರಿಯ ಪ್ರಾಥಮಿಕ ಶಾಲೆಯ ನಾಸಿರ್‌ಖಾನ್ ಎಂಬ ಚೋಟುದ್ದದ ಪೋರ ಈ ಎಲ್ಲರ ಪೈಕಿ ಅತ್ಯಂತ ಗಮನ ಸೆಳೆಯುತ್ತಿದ್ದಾನೆ. ಈ ಬಾಲಕನಿಗೆ ಭವ್ಯ ಭವಿಷ್ಯವಿದೆ ಎಂದು ತರಬೇತಿದಾರರ ಅನಿಸಿಕೆ. ಅಂತೆಯೇ ಎಂಟನೆಯ ತರಗತಿಯಲ್ಲಿ ಓದುತ್ತಿರುವ ಇಲ್ಲಿನ ಶಶಿಪ್ರಕಾಶ ಇತ್ತೀಚೆಗೆ ಮೈಸೂರಿನಲ್ಲಿ ನಡೆದ ರಾಜ್ಯ ಮಟ್ಟದ ಕುಸ್ತಿ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ ಗಳಿಸಿ ತನ್ನ ಬೆಳ್ಳಿಯ ಪದಕವನ್ನು ಉಳಿಸಿಕೊಂಡಿದ್ದಾನೆ.

ಈ ಗರಡಿಮನೆ ಮತ್ತು ಕುಸ್ತಿ ಪಟುಗಳನ್ನು ಸಂಬಂಧಪಟ್ಟ ಇಲಾಖೆಗಳು

(ಮುಂದಿನ ಪುಟಕ್ಕೆ)

# ಉಗಿ ಚಾಲಿತ ಪಿಸ್ಟನ್ ರಹಿತ ನೀರೆತ್ತುವ ಯಂತ್ರ

ನೀರು ಹಾಯಿಸಲಾಗದೆ ಜಮೀನೆಲ್ಲ ಒಣಗುತ್ತಿದೆ. ಪಂಪ್‌ಸೆಟ್ ಕೊಂಡರೆ ವಿದ್ಯುತ್ ಸಂಪರ್ಕ ಸಿಗುವುದೇ ಕಷ್ಟ ; ಸಿಕ್ಕರೂ ಯಾವಾಗಲೂ 'ಕರೆಂಟ್' ಇರುವುದೇ ಇಲ್ಲ. ಇನ್ನು ಡೀಸೆಲ್ ಅಂತೂ ದುಬಾರಿ ಎಂದರೂ ಈಗೀಗ ಸಿಗುವುದೇ ದುಸ್ತರವಾಗಿದೆ.

ಹಾಗಾದರೆ ರೈತರು–ಅದರಲ್ಲೂ ಸಣ್ಣ, ಮಧ್ಯಮ ರೈತರುಗಳು ಜಮೀನು ಉಳಿಸಿಕೊಳ್ಳಲು ದಾರಿಯೇ ಇಲ್ಲವೆ? ಎಂದರೆ "ಇಲ್ಲಿದೆ ಒಂದು ದಾರಿ—ಉಗಿ ಚಾಲಿತ, ಪಿಸ್ಟನ್‌ರಹಿತ ನೀರೆತ್ತುವ ಯಂತ್ರ" ಎನ್ನುತ್ತದೆ ಕೇಂದ್ರೀಯ ಅಸಾಂಪ್ರದಾಯಿಕ ಶಕ್ತಿ ಮೂಲಗಳ ಇಲಾಖೆ

ಕೇವಲ ಕಸಕಡ್ಡಿ ಮತ್ತಿತರ ಅನುಪಯುಕ್ತ ತ್ಯಾಜ್ಯವಸ್ತುಗಳನ್ನಷ್ಟೇ ಉರಿಸಿದರೂ ಸಾಕಾಗುವ ಈ ಯಂತ್ರ ೧೮ ಅಡಿ ಆಳದಿಂದ ನೀರೆತ್ತಬಲ್ಲುದು ಹಾಗೂ ನೆಲದಿಂದ ಆರೂ ಮುಕ್ಕಾಲು ಅಡಿಯಷ್ಟು ಎತ್ತರಕ್ಕೆ ನೀರನ್ನು ಪಂಪ್ ಮಾಡಬಲ್ಲುದು. ಇನ್ನೊಂದು ಕವಾಟವನ್ನು ಅಳವಡಿಸಿದರೆ ಇನ್ನೂ ೨೪ ಅಡಿ ಎತ್ತರಕ್ಕೆ ನೀರು ಪಂಪ್ ಮಾಡಬಲ್ಲುದು.

ಈ ಯಂತ್ರಕ್ಕೆ ಪಿಸ್ಟನ್ ಆಗಲಿ, ಇನ್ನಿತರ ಯಾವುದೇ ಚಲಿಸುವ ಭಾಗಗಳಾಗಲಿ ಇಲ್ಲ. ಆದ್ದರಿಂದ ಸುಮಾರು ೧೦ ವರ್ಷಗಳಷ್ಟು ಕಾಲ ಯಾವುದೇ ರಿಪೇರಿ ಅಥವಾ ಬಿಡಿ ಭಾಗಗಳ ಬದಲಾವಣೆಯಿಲ್ಲದೆ ಇದನ್ನು ಬಳಸಬಹುದು ಎನ್ನುತ್ತಾರೆ ಕೇಂದ್ರೀಯ ಶಕ್ತಿ ಅನುಸಂಧಾನ ಸಂಸ್ಥೆಯ ಇಂಜಿನಿಯರ್ ಪರಮೇಶ್ವರ.

ಸದ್ಯದ ಮಾರುಕಟ್ಟೆ ಬೆಲೆಯಲ್ಲಿ ೫೫೦೦ ರಿಂದ ೬೦೦೦ ರೂ. ಖರ್ಚು ತಗಲುವ ಇದನ್ನು ಮಲೆನಾಡಿನ ಸ್ಥಳೀಯ ಅಗತ್ಯಕ್ಕನುಗುಣವಾಗಿ ಇನ್ನೂ ಸ್ವಲ್ಪ ಸುಧಾರಿಸಿ, ಸ್ಥಳೀಯ ಸಣ್ಣ ಉದ್ದಿಮೆದಾರರ ಮೂಲಕ ಉತ್ಪಾದಿಸಿ, ಸದ್ಯದಲ್ಲೇ ಗ್ರಾಮಾಂತರ ಜನತೆಗೆ ಸರಬರಾಜು ಮಾಡಲಾಗುವುದು ಎಂದು ಅವರು ಹೇಳುತ್ತಾರೆ.

ಜ. ೨೯ರಂದು ಕೊಪ್ಪದ ಕೃಷಿ ವಿಚಾರ ವಿನಿಮಯ ಕೇಂದ್ರ, ಸಿಂಡಿಕೇಟ್ ಬ್ಯಾಂಕ್, ಜೇಸೀಸ್ ಮತ್ತು ಆಯುರ್ವೇದ ಕಾಲೇಜ್‌ಗಳ ಸಂಯುಕ್ತ ಆಶ್ರಯದಲ್ಲಿ ಈ ಯಂತ್ರದ ಪ್ರಾತ್ಯಕ್ಷಿಕೆ ಕೊಪ್ಪದಲ್ಲಿ ನಡೆಯಿತು.

ಇದೇ ರೀತಿ, ಅತಿ ಸರಳ ತಂತ್ರಜ್ಞಾನದಲ್ಲಿ ನೀರು ಕಾಯಿಸುವ ಯಂತ್ರ (ಗೀಸರ್)ವನ್ನೂ ತಯಾರಿಸಲಾಗಿದ್ದು, ಅದನ್ನು ಅಡಿಕೆ ಬೇಯಿಸುವುದೂ ಸೇರಿದಂತೆ ಬಹೂಪಯೋಗಿಯಾಗಿ ಮಾರ್ಪಡಿಸಿದ ಮಾದರಿಯೂ ಲಭ್ಯವಿದೆ. ಕೊಪ್ಪದಲ್ಲಿ ಸಮಯಾಭಾವದಿಂದ ಅದರ ಪ್ರದರ್ಶನ ನಡೆಯಲಿಲ್ಲ.

(ಮುಂದಿನ ಪುಟಕ್ಕೆ)

## ಶೃಂಗೇರಿ ಜೇಸಿಯಿಂದ ನವೋದಯ ಪರೀಕ್ಷೆ ತರಬೇತಿ

ಶೃಂಗೇರಿ : ಇಲ್ಲಿನ ಜೇಸಿ ಸಂಸ್ಥೆಯು ನವೋದಯ ಶಾಲೆ ಪ್ರವೇಶ ಪರೀಕ್ಷೆಗೆ ಕುಳಿತುಕೊಳ್ಳುವ ವಿದ್ಯಾರ್ಥಿಗಳಿಗಾಗಿ ಪ್ರತಿ ವರ್ಷದಂತೆ ಈ ವರ್ಷವೂ ಸಹ ಮೂರು ದಿನಗಳ ತರಬೇತಿಯನ್ನು ಏರ್ಪಡಿಸಿದೆ.

ಈ ಬಾರಿ ಶೃಂಗೇರಿಯಲ್ಲಿ ಮಾತ್ರ ಏರ್ಪಡಿಸಲಾಗಿರುವ ಈ ಶಿಬಿರ ಮಾರ್ಚ್ ೧, ೨ ಮತ್ತು ೩ ರಂದು ಸರ್ಕಾರಿ ಹಿ. ಪ್ರಾ. ಬಾಲಕಿಯರ ಶಾಲೆಯಲ್ಲಿ ನಡೆಯುತ್ತದೆ ನಿಗದಿತ ಶುಲ್ಕ ೫೦ ರೂ. ಪ್ರವೇಶಕ್ಕೆ ಅರ್ಜಿ ಸಲ್ಲಿಸಲು ಕಡೇ ದಿನಾಂಕ. ೧೫-೨-೯೧.

ವಿಳಾಸ : ಕಲ್ಪತರು ಟ್ರೇಡರ್ಸ್, ಶೃಂಗೇರಿ, ಅಥವಾ ವೆಂಕಟೇಶ ಭಟ್, ಗಣಿತ ಉಪನ್ಯಾಸಕರು, ಜೆ.ಸಿ.ಬಿ ಎಂ. ಕಾಲೇಜು

## ಶಿಕ್ಷಕರ ನೇಮಕದಲ್ಲಿ ಭ್ರಷ್ಟಾಚಾರ ನಡೆಯದಂತೆ ಕ್ರಮ: ಮೊಯ್ಲಿ

ಕೊಪ್ಪ : ಶಿಕ್ಷಕರ ನೇಮಕ ಮತ್ತಿತರ ಕೆಲಸಗಳಲ್ಲಿ ಲಂಚಗುಳಿತನ, ಪ್ರಭಾವ ಮುಂತಾದುವು ನಡೆಯದಂತೆ ಹಾಗೂ ಶಿಕ್ಷಕರ ಕೊರತೆ ಇರುವ ಕಡೆ ಶೀಘ್ರವಾಗಿ ನೇಮಕವಾಗುವಂತೆ ಕ್ರಮ ಕೈಗೊಳ್ಳುವುದಾಗಿ ಶಿಕ್ಷಣ ಸಚಿವ ವೀರಪ್ಪ ಮೊಯ್ಲಿ ಭರವಸೆ ಕೊಟ್ಟರು.

ಜ. ೨೮ ರಂದು ಇಲ್ಲಿನ ಸರ್ಕಾರಿ ಕಿರಿಯ ಕಾಲೇಜಿನ ಹೊಸ ಸೇರ್ಪಡೆ ಕಟ್ಟಡದ ಉದ್ಘಾಟನೆ ಮತ್ತು ಗುರು ಭವನದ ಶಂಕು ಸ್ಥಾಪನೆ ಮಾಡಿ ಮಾತನಾಡಿದ ಅವರು, ಮಂಡಲ ಪಂಚಾಯ್ತಿ ಮತ್ತು ಶಾಲಾಭಿವೃದ್ಧಿ ಸಮಿತಿ ನೀಡಿದ ಮನವಿ ಪತ್ರಗಳಲ್ಲಿನ ಕೋರಿಕೆಗಳನ್ನು ಆದಷ್ಟು ಶೀಘ್ರವಾಗಿ ನೆರವೇರಿಸುವುದಾಗಿ ತಿಳಿಸಿದರು.

ಶಂಕರ್ ಸಾರಿಗೆ ಸಂಸ್ಥೆಯ ಬಸ್ ನಿಲುಗಡೆ ಬಗ್ಗೆ ಶೀಘ್ರನೇ ಮಂಜೂರಿನಂತೆ ವ್ಯವಸ್ಥೆ ಮಾಡುವುದಾಗಿಯೂ, ಸ್ಥಳೀಯ ಪ್ರ. ದ. ಕಾಲೇಜಿನಲ್ಲಿ ವಿಜ್ಞಾನ ವಿಭಾಗ ತೆರೆಯಲು ಕ್ರಮ ಕೈಗೊಳ್ಳುವುದಾಗಿಯೂ ತಿಳಿಸಿದರು.

ಲೋಕಸಭಾ ಸದಸ್ಯ ಪುಟ್ಟೇಗೌಡ, ಜಿ. ಪ. ಅಧ್ಯಕ್ಷ ರಾಮದಾಸ್ ಅವರುಗಳು ನಾಗರಿಕರ ಮನವಿ ಪತ್ರಗಳಲ್ಲಿನ ಸಮಸ್ಯೆಗಳ ನಿವಾರಣೆಗೆ ಶ್ರಮಿಸುವ ಭರವಸೆಯಿತ್ತರು. ಕೊಪ್ಪ ತಾಲ್ಲೂಕಿನ ಅಧ್ಯಾಪಕರುಗಳಿಗಾಗಿ, ಎಇಒ ಕಛೇರಿಯ ಆಶ್ರಯದಲ್ಲಿ ೬ ತಿಂಗಳ ಇಂಗ್ಲಿಷ್ ಸಂಭಾಷಣಾ ತರಗತಿ ನಡೆಸಿಕೊಟ್ಟ ಕೆ. ಎ. ಶಿವ ಸ್ವಾಮಿಯವರನ್ನು ಅಭಿನಂದಿಸಲಾಯಿತು ಮತ್ತು ತರಬೇತಿ ಪಡೆದ ಸುಮಾರು ೨೫ ಮಂದಿ ಶಿಕ್ಷಕರಿಗೆ ಪ್ರಶಸ್ತಿ ಪತ್ರ ವಿತರಿಸಲಾಯಿತು.

ಶಾಸಕ ಶಿವಣ್ಣ ಅಧ್ಯಕ್ಷತೆ ವಹಿಸಿದ್ದರು. ಜಿ. ಪ. ಸದಸ್ಯರು, ಮಂಡಲ ಪ್ರಧಾನರು ಮುಂತಾದವರು ಹಾಜರಿದ್ದರು. ಅತಿಥಿಗಳಾಗಿ ಭಾಗವಹಿಸಬೇಕಿದ್ದ ಎಂ. ಡಿ. ಬಾಲಕೃಷ್ಣ ಮತ್ತು ಪಿ. ಜಿ. ಗುರ್ಜರ್ ಅವರುಗಳು ಹಾಜರಿರಲಿಲ್ಲ. ಪ್ರಿನ್ಸಿಪಾಲ್ ರಾಮಕೃಷ್ಣಯ್ಯ ಸ್ವಾಗತಿಸಿ. ಚಾಮರಾಜ್ ವಂದಿಸಿದರು. (ವರದಿ : ಹರ್ಡೀಕರ್)

## ಶೃಂಗೇರಿ ತಾ|| ರೈತರಿಗೆ ಬಾಳೆಹೊನ್ನೂರಲ್ಲಿ ಪ್ರತಿ ಶನಿವಾರ ಡೀಸೆಲ್ ವಿತರಣೆ

ಶೃಂಗೇರಿ : ಈ ತಾಲ್ಲೂಕಿನ ರೈತರಿಗೆ ವಾರಕ್ಕೆ ಕನಿಷ್ಠ ೫೦೦೦ ಲೀಟರ್ ಡೀಸೆಲ್ನ್ನು ಬಾಳೆಹೊನ್ನೂರಿನ ಶಂಕರ್ ಮಿಲ್ ಪೆಟ್ರೋಲ್ ಬಂಕ್‌ನವರು ಕಾದಿರಿಸಿ, ಪ್ರತಿ ಶನಿವಾರ ರೈತರು ಪಡಿತರ ಚೀಟಿಗೆ ದಾಖಲು ಮಾಡಿ ವಿತರಣೆ ಮಾಡುವಂತೆ ಜಿಲ್ಲಾಧಿಕಾರಿಗಳು ಆದೇಶಿಸಿದ್ದಾರೆ. ಆದ್ದರಿಂದ ಈ ತಾಲ್ಲೂಕಿನವರಿಗೆ ಇನ್ನು ಮುಂದೆ ಕೊಪ್ಪ ಬಂಕ್‌ನಲ್ಲಿ ಡೀಸೆಲ್ ವಿತರಣೆ ಇರುವುದಿಲ್ಲ.

## ಜಯಪುರ ಸೊಸೈಟಿ ಕಟ್ಟಡದ ಮಳಿಗೆ ಕಡಿಮೆ ಬಾಡಿಗೆಗೆ ಪಡೆಯಲು ಯತ್ನ-ಆರೋಪ

ಜಯಪುರ : ಆರ್ಥಿಕವಾಗಿ ಈಗಾಗಲೇ ಸಂಕಷ್ಟದಲ್ಲಿರುವ ಇಲ್ಲಿನ ವ್ಯ. ಸೇ. ಸಹಕಾರ ಸಂಘದ ಕಟ್ಟಡದಲ್ಲಿರುವ ಮಳಿಗೆಯನ್ನು ಖಾಸಗಿಯವರು ತಿಂಗಳಿಗೆ ೧೫೦೦ ರೂ. ವರೆಗೂ ಬಾಡಿಗೆಗೆ ಪಡೆಯಲು ಸಿದ್ಧರಿದ್ದರೂ ಸಹ; ಡಿಸಿಸಿ ಬ್ಯಾಂಕ್ ನವರು ಕೇವಲ ೩೦೦ ರೂ. ಗಳಿಗೆ ಅದನ್ನು ವಹಿಸಿಕೊಳ್ಳಲು ಒತ್ತಡ ತರುತ್ತಿದ್ದಾರೆಂದು ಸಾರ್ವಜನಿಕ ಮುಖಂಡರು ದೂರಿದ್ದಾರೆ

ಸಂಬಂಧಪಟ್ಟ ಅಧಿಕಾರಿಗಳು ಈ ಬಗ್ಗೆ ತುರ್ತು ಗಮನ ನೀಡಬೇಕೆಂದು ಅವರು ಒತ್ತಾಯಿಸಿದ್ದಾರೆ

## ಗಡಿಕಲ್ ಪ್ರೌಢಶಾಲೆಯ ಬೆಳ್ಳಿಹಬ್ಬ

ಗಡಿಕಲ್ : ಚಿಕ್ಕ ವಯಸ್ಸಿನಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸ ಕೊಡದಿದ್ದರೆ ಅವರನ್ನು ಕೊಂದಂತೆ ಎಂದು ಹಿರಿಯರು ಹೇಳಿದ್ದಾರೆ. ಅಂತಹ ಶಿಕ್ಷಣ ಮತ್ತು ಉತ್ತಮ ಸಂಸ್ಕಾರ ನೀಡುವ ಸಲುವಾಗಿ ಇಲ್ಲಿನ ಹಿರಿಯರು ಕಟ್ಟಿ ಬೆಳೆಸಿರುವ ಈ ಪ್ರೌಢ ಶಾಲೆ ಈಗಾಗಲೇ ಉತ್ತಮ ಫಲಿತಾಂಶ ಕಾಣುತ್ತಿದ್ದು, ಇನ್ನೂ ಉತ್ತಮ ವಿದ್ಯಾರ್ಥಿಗಳನ್ನು ರೂಪಿಸುತ್ತ ಅಭಿವೃದ್ಧಿ ಪಥದಲ್ಲಿ ಸಾಗಲಿ ಎಂದು ಆದಿಚುಂಚನಗಿರಿಯ ಬಾಲಗಂಗಾಧರನಾಥ ಸ್ವಾಮಿಗಳು ಇಲ್ಲಿ ಹಾರೈಸಿದರು

ಅವರ ಕ್ಷೇತ್ರದ ಶಿಕ್ಷಣ ಟ್ರಸ್ಟ್ ನಡೆಸುತ್ತಿರುವ ಇಲ್ಲಿನ ಲಾಲ್ ಬಹಾದುರ್ ಶಾಸ್ತ್ರಿ ಪ್ರೌಢಶಾಲೆಯ ಬೆಳ್ಳಿ ಹಬ್ಬದ ಸಮಾರಂಭದಲ್ಲಿ ರಜತ ಮಹೋತ್ಸವ ಸಭಾಂಗಣ ಉದ್ಘಾಟಿಸಿ ಆಶೀರ್ವಚನ ನೀಡಿದ ಅವರು, ಈ ಸಂಸ್ಥೆಯ ಅಭಿವೃದ್ಧಿಗಾಗಿ ಶ್ರಮಿಸಿದ ಹಿರಿಯರನ್ನೂ, ಈ ಶಾಲೆಯಲ್ಲಿ ಓದಿ ಇಂದ ಉತ್ತಮ ಸ್ಥಾನಗಳಲ್ಲಿರುವ ಪ್ರತಿಭಾವಂತರನ್ನೂ ಸನ್ಮಾನಿಸಿದರು.

ಶಾಸಕ ಶಾಮಣ್ಣ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ವೀರಪ್ಪ ಮೊಯ್ಲಿ, ಬಿ. ಎಲ್. ರಾಮದಾಸ್, ಕೆ. ಟಿ. ನಾರಾಯಣ ಮೂರ್ತಿ ಮುಂತಾದವರು ಮುಖ್ಯ ಅತಿಥಿಗಳಾಗಿದ್ದರು.

ಜ. ೨೮ ರಂದು ಅದ್ದೂರಿಯಾಗಿ, ಸಂಭ್ರಮದಿಂದ ನಡೆದ ಬೆಳ್ಳಿ ಹಬ್ಬದ ಕಾರ್ಯಕ್ರಮಗಳಲ್ಲಿ ಸುತ್ತಮುತ್ತಲಿನ ಸುಮಾರು ೨೦೦೦ ಕ್ಕೂ ಹೆಚ್ಚು ಜನ ಅತ್ಯಾಸಕ್ತಿಯಿಂದ ಪಾಲ್ಗೊಂಡಿದ್ದರು

## ವಿ.ಪಿ. ಸಿಂಗ್ ಭೇಟಿ ರದ್ದು

ಕೊಪ್ಪ : ಮಾಜಿ ಪ್ರಧಾನಿ ವಿ. ಪಿ. ಸಿಂಗ್ ಅವರ ಕರ್ನಾಟಕ ಪ್ರವಾಸ ಮುಂದೂಡಲ್ಪಟ್ಟಿದ್ದು, ಅವರು ಚಿಕ್ಕಮಗಳೂರಿಗೆ ಫೆ. ೬ರಂದು ನೀಡಬೇಕಿದ್ದ ಭೇಟಿ ಸದ್ಯಕ್ಕೆ ರದ್ದಾಗಿದೆ ಎಂದು ತಿಳಿದು ಬಂದಿದೆ.

## ಬಸರಿಕಟ್ಟೆ ರಥೋತ್ಸವ

ಬಸರೀಕಟ್ಟೆ : ಇಲ್ಲಿನ ಜನಾರ್ದನಸ್ವಾಮಿ ಜಾತ್ರೆ ಫೆ ೩ರಿಂದ ೬ರವರೆಗೆ ನಡೆಯಲಿದೆ ಫೆ. ೪ರಂದು ಬ್ರಹ್ಮ ಮತ್ತು ಮಹಾರಥೋತ್ಸವಗಳು ನಡೆಯುತ್ತವೆ

## ಮಲೆನಾಡು ಬಂದ್

(ಮೊದಲ ಪುಟದಿಂದ)

ಗಳಿ. ಅದೂ ಹಳೆಯ ವೇತನ ಪರಿಷ್ಕರಣ ಮಾಡಿ ೩ ವರ್ಷಗಳ ನಂತರ, ಸೂಕ್ತ ವೇತನ ಹೆಚ್ಚಳಕ್ಕಾಗಿ ಒತ್ತಾಯಿಸುವುದರಲ್ಲಿ ತಪ್ಪೇನಿಲ್ಲ; ಸಾಕಷ್ಟು ಲಾಭ ಗಳಿಕೆಯಲ್ಲಿರುವ ಶಂಕರ್ ಸಾರಿಗೆಯ ಮಾಲೀಕರು ಕಾರ್ಮಿಕರ ಬೇಡಿಕೆಗಳನ್ನು ಈಡೇರಿಸಲೇಬೇಕು ಎಂದು ಇಂದು ಪ್ರತಿಯೊಬ್ಬರೂ ಅಭಿಪ್ರಾಯಪಡುತ್ತಿದ್ದಾರೆ.

ಅಷ್ಟೇ ಅಲ್ಲ, ಮುಷ್ಕರ ನಿರತ ಕಾರ್ಮಿಕ ಸಮೂಹಕ್ಕೆ ಎಲ್ಲಾ ವರ್ಗದ ಜನತೆ ನಾನಾ ರೀತಿಯಲ್ಲಿ ಸಹಾಯ ನೀಡುತ್ತಿದ್ದಾರೆ ಬಸ್‌ಗಳಿಲ್ಲದೆ ಜನರ ಬವಣೆ ತಡೆಯಲಸಾಧ್ಯವಾಗಿರುವುದರ ಜೊತೆಗೆ ಮಾಲಿಕರ ಹಟಮಾರಿತನದ ಬಗ್ಗೆ ಜನರ ಆಕ್ರೋಶ ಎಷ್ಟಿದೆಯೆಂದರೆ, ಸಂಘಟನೆಯ ಒಂದು ಕಿಡಿ ಬಿದ್ದರೂ ಅದು ಭುಗಿಲೇಳಲು ಸಿದ್ಧವಾಗಿದೆ. ಇದನ್ನು ಮನುಷ್ಯತ್ವ ಹೀನರಾದ ಈ ನಿರ್ಲಜ್ಜ ಮಾಲೀಕರು ಬೇಗ ತಿಳಿದಷ್ಟೂ ಒಳ್ಳೆಯದು

## ಅಡಿಕೆ ಧಾರಣೆ

**ಶಿವಮೊಗ್ಗ ೧-೨-೯೧**

ಸರಕು : ೫೨೧೦-೫೬೫೯

ಚೆಟ್ಟಿ : ೪೭೬೯-೫೧೨೭

ಗೊರಬಲು : ೨೮೭೯-೩೬೭೯

**ಸಾಗರ ೩೧-೧-೯೧**

ಆಪಿ : ೫೬೭೯-೫೮೮೯

ರಾಶಿ ಇಡಿ : ೪೮೯೯-೪೯೭೯

ಚಾಲಿ : ೪೦೮೦-೪೨೦೯

ಸಿಪ್ಪೆ ಗೋಟು : ೧೯೮೯-೨೧೬೬

## ಪರವಾನಗಿ ಹಗರಣ : ಇಬ್ಬಗೆ ನೀತಿ

(ಹಿಂದಿನ ಪುಟದಿಂದ)

ದೂರಿದರು ಆದರೆ ಅದರಲ್ಲಿ ಶೀತಲೀಕರಣ ಯಂತ್ರದಲ್ಲಿಟ್ಟು ಮಾರುವುದೆಂದಾಗಲಿ, ಈಗಾಗಲೇ ಇಂಥ ಇನ್ನೂ ೨ ಅಂಗಡಿಗಳಿಗೆ ಪರವಾನಗಿ ಕೊಟ್ಟು ನಡೆಸುತ್ತಿರುವುದನ್ನಾಗಲಿ ನಮೂದಿಸಲಿಲ್ಲ.

ಹೀಗಾಗಿ ನನ್ನ ಅಂಗಡಿ ಪರವಾನಗಿಗೆ ಜಿಲ್ಲಾ ಪರಿಷತ್ತಿನಿಂದ ತಡೆ ಬಂತು ಆದರೆ. ಇದು ಸರಿಯಲ್ಲ, ಸ್ಥಳ ತನಿಖೆ ಮಾಡಿ ಎಂದು ಜಿ. ಪ. ಗೆ ಒತ್ತಡ ಹೋಯಿತು ಜಿ. ಪ. ಮುಖ್ಯ ಕಾರ್ಯದರ್ಶಿಯವರು ಕಾರ್ಯ ನಿಮಿತ್ತ ಕೊಪ್ಪಕ್ಕೆ ಬಂದಿದ್ದವರು ಸ್ಥಳ ತನಿಖೆ ಮಾಡಿ, ಇದು ಕೇವಲ ಪಟ್ಟ ಭದ್ರ ಹಿತಾಸಕ್ತಿಗಳ ಕೈವಾಡ ಮಾತ್ರ ಎಂಬುದನ್ನು ಮನಗಂಡರು. ಆದರೆ ನನ್ನ ಪರವಾನಗಿಯ ಬಗ್ಗೆ ಇನ್ನೂ ನಿರ್ಧಾರ ತೆಗೆದುಕೊಂಡಿಲ್ಲ

ಈಗ ಈ ವಿಚಾರದಲ್ಲಿ ಯೋಚನೆ ಮಾಡಬೇಕಾಗಿರುವುದಿಷ್ಟೇ : ನನ್ನ ಅಂಗಡಿಯಿಂದ ಈ ಪ್ರದೇಶದಲ್ಲಿ ಅಶಾಂತಿ ಉಂಟಾಗುವುದೆಂದು ದೂರು ಬಂದಿದೆಯಾದರೆ ಇನ್ನಿಬ್ಬರ ಅಂಗಡಿಯಿಂದಲೂ ಅದು ಆಗುತ್ತಿರಬೇಕು. ಅದಲ್ಲವಾದರೆ ಇದು ಕೇವಲ ಪಟ್ಟಭದ್ರ ಹಿತಾಸಕ್ತಿಗಳ ಕೈವಾಡ ಮತ್ತು ಸಂಬಂಧಿಸಿದವರ ಇಬ್ಬಗೆ ನೀತಿ ಮಾತ್ರ ಆಗುತ್ತದೆ ಇದನ್ನು ಸಾರ್ವಜನಿಕರು ಖಂಡಿಸಿದ್ದಾರೆ ಮಂಡಲದವರು ಮತ್ತು ಜಿ ಪ. ಇದನ್ನು ಸರಿಪಡಿಸಿ ನನಗೆ ನ್ಯಾಯ ದೊರಕಿಸಿ ಕೊಡುತ್ತಾರೆಂದು ಆಶಿಸುತ್ತೇನೆ.

ಈ ಸಮಸ್ಯೆಯ ಪರಿಹಾರಕ್ಕೆ ಇರುವುದು ಈಗ ಎರಡೇ ದಾರಿ ಒಂದು-ನ್ಯಾಯವಾಗಿ ನನಗೂ ಲೈಸೆನ್ಸ್ ಕೊಡುವುದು, ಇಲ್ಲನೇ ಉಳಿದಿಬ್ಬರ ಲೈಸೆನ್ಸನ್ನೂ ರದ್ದುಗೊಳಿಸುವುದು — ಆಲ್‌ಫ್ರೆಡ್ ಡಿ'ಸೋಜ. ಕೊಪ್ಪ.

## ಸರ್ಕಾರದ ಮನ್ನಣೆ...

(ಹಿಂದಿನ ಪುಟದಿಂದ)

ಪ್ರೋತ್ಸಾಹಿಸುವುದು ಅತ್ಯಗತ್ಯ ರಾಷ್ಟ್ರ ಪ್ರಶಸ್ತಿಗಳನ್ನು ನೀಡುವಾಗ ಹಳ್ಳಿ ಮೂಲೆಗಳಲ್ಲಿ ಮೌನ ಸೇವೆ ಸಲ್ಲಿಸುತ್ತಿರುವ ಪ್ರತಿಭಾವಂತರಾದ ವಿ ಎಂ ಶಿವಮೂರ್ತಿಯವರಂತಹ ನಿಷ್ಕಾಮ ಕರ್ಮಿಗಳಿಗೆ ಆದ್ಯತೆ ನೀಡಬೇಕಾಗಿದೆ

ಅನಿಲ್ ಕುಮಾರ್ ಕೆ. ಎನ್.

## ಉಗಿ ಚಾಲಿತ ಯಂತ್ರ

(ಹಿಂದಿನ ಪುಟದಿಂದ)

ಆದರೆ ಸದ್ಯದಲ್ಲೇ ಶೃಂಗೇರಿಯಲ್ಲಿ ಇವೆಲ್ಲವುಗಳ ಪ್ರದರ್ಶನ ನಡೆಸುವುದಾಗಿ ಪರಮೇಶ್ವರ ತಿಳಿಸಿದರು.

**ಸಸ್ಯ ಸಂಜೀವಿನಿ**

ಅದೇ ಸಂಜೆ ಪುರಭವನದಲ್ಲಿ "ಸ್ವಸ್ಥ ಜೀವನಕ್ಕೆ ಸಸ್ಯಗಳ ಉಪಯೋಗ" ಎಂಬ ವಿಚಾರವಾಗಿ ಆಕಾಶವಾಣಿಯ 'ಸಸ್ಯ ಸಂಜೀವಿನಿ' ಕಾರ್ಯಕ್ರಮ ಮಾಲಿಕೆಯ ನಿರ್ದೇಶಕರಾದ ಡಾ|| ಆನಂದ ಆಳ್ವಾರ್‌ರವರು ಸ್ಲೈಡ್ ಪ್ರದರ್ಶನ ಸಹಿತ ವಿವರಣೆಯಿತ್ತರು ಈ ಕಾರ್ಯಕ್ರಮ ಬಹಳ ಬೋಧಪ್ರದವಾಗಿತ್ತು. (ವಸಂತ ಹರ್ಡೀಕರ್)

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ... : ದೀಪಟಿಗೆ ಅಚ್ಚು ಕೂಟ, ಕೊಪ್ಪ